# ‘ ಭಾಗ್ಯೋದಯ ’

ಪ್ರಥಮ ಮುದ್ರಣ : ನವೆಂಬರ, ೧೯೫೭

( ೫೦೦ ಪ್ರತಿಗಳು )



**ಬೆಲೆ : ಮೂರು ಆಣೆ**

( ಹತ್ತೊಂಬತ್ತು ನಯೆ ಪೈಸೆ )

ಮುದ್ರಕರು :-
**ಡಿ. ಎಸ್. ಕಬಾಡಗಿ,**
ಮ್ಯಾನೇಜರ,
ದಿ ವಿಶ್ವಭಾರತ ಪ್ರಿಂಟಿಂಗ ಮತ್ತು
ಪಬ್ಲಿಶಿಂಗ ಕಂಪನಿ, ಲಿ.,
ಬೆಳಗಾಂವ.

ಪ್ರಕಾಶಕರು :-
**ಬಾಳೇಶ ಶಂ. ಲಕ್ಷೆಟ್ಟಿ,**
ಉದಯ ಪ್ರಕಾಶನ; ‘ಗಂಗಾನಿಲಯ’,
ಗೋಕಾಕ.

# ಮಂಗಲ ನುಡಿ

“ ಕಲ್ಪನೆಯ ಕೂಸಾದ ಕಲೆ ಪಲಾಯನ ವಿಧಾನ ” ಎಂಬ ತಾರ್ಕಿಕರ ಆರೋಪದಿಂದ ಕಾವ್ಯ ಮುಕ್ತವಾಗುತ್ತಿದೆ – ಜನಸಮ್ಮುಖವಾಗಿ. ಸತ್ಯ-ಸೌಂದರ್ಯಗಳ ಉಪಾಸಕನಾದ ಕವಿ ಇತ್ತೀಚೆ ರಾಷ್ಟ್ರೀಯ ಪ್ರವೃತ್ತಿಯುಳ್ಳವನಾಗುತ್ತಿದ್ದಾನೆ. ಅವನ ಸುರಸ್ವಪ್ನವನ್ನು ಅರಿತ ಜನತೆ ಉತ್ತಮವಾದುದಕ್ಕಾಗಿ ಶ್ರಮಿಸುತ್ತಿದೆ. ಇಂತಹ ಕವಿಪರಂಪರೆ ವಿಟ್ಮನ್, ಕಾರ್ಪೆಂಟರ್, ಮೈಕೊವಸ್ಕಿ, ಮೊದಲಾದವರಿಂದ ಪುಷ್ಟವಾಗಿದೆ. ಶ್ರೀ. ಬಾಳೇಶ ಲಕ್ಷೆಟ್ಟಿಯವರೂ ಆ ದಾರಿಯಲ್ಲಿ ಹೆಜ್ಜೆ ಹಾಕಿದ್ದು ಸೂಕ್ತವಾದುದು. ಈ ಪುಟ್ಟ ಸಂಗ್ರಹ ರಾಷ್ಟ್ರೀಯ ಸಾಹಿತ್ಯ ಸಿಂಧುವಿನಲ್ಲಿ ಒಂದು ಬಿಂದುವಾಗಿದೆ. ‘ಬಾಳೇಶ’ರ ದೃಷ್ಟಿ ಇನ್ನೂ ವಿಶಾಲವಾಗಿ ಏಕದೇಶಿಯವಾಗದೆ ಪುಷ್ಟವಾಗಿ ಸರ್ವತೋಮುಖವಾಗಿ ಅಭಿವೃದ್ಧಿ ಹೊಂದಲೆಂದು ಹಾರೈಸುತ್ತೇನೆ.

ಲಲಿತ ಪ್ರಸನ್ನ ಭಾವನೆಗಳು ಅಭಿವ್ಯಕ್ತವಾದ ಅವರ ಈ ಕವನಗಳಲ್ಲಿ, ಅಲ್ಲಲ್ಲಿ ಉತ್ಸಾಹದ ಕೆಲವು ಸ್ಖಾಲಿತ್ಯಗಳಿವೆ. ಆದರೂ ಕವನಗಳಲ್ಲಿ ಒಂದು ಬಗೆಯ ಶಕ್ತಿಯಿದೆ. ಇಲ್ಲಿನ ಐದೂ ಕವನಗಳು ವಾಚನಾರ್ಹವಾಗಿವೆ ಎಂದು ಧಾರಾಳವಾಗಿ ಹೇಳಬಹುದು. ಅವರ ದೃಷ್ಟಿ ಪ್ರಗತಿಪರವಾದುದು. ಭಾರತದ ಏಕತೆ, ಕರ್ನಾಟಕದ ಹಿರಿಮೆ ಅವರ ದೃಷ್ಟಿಯಲ್ಲಿ ವ್ಯಕ್ತವಾಗಿವೆ. ಭಾರತದ ಕೊಡುಗೆ ಪಂಚಶೀಲ ಎಂಬ ಪ್ರಜ್ಞೆ ಅವರಲ್ಲಿದೆ. ಸಂಸ್ಕೃತಿಯ ಭವ್ಯತೆ – ದಿವ್ಯತೆಗಳನ್ನು ಕಂಡ ಕವಿ ಅದಕ್ಕಾಗಿ ಶ್ರಮಿಸಲು ಜನತೆಯನ್ನು ಕರೆಯುತ್ತಾರೆ. ‘ಶತವರುಷಗಳ ಕನಸು’ ಭಾರತದ ಪ್ರಥಮ ಕ್ರಾಂತಿ ವೀರರಿಗೆ ಕೊಟ್ಟ ತರ್ಪಣ. ನಾಡಿಗೆ ಬಂದ ಈ ಸ್ವಾತಂತ್ರ್ಯ ಅಂದಿನ ಕ್ರಾಂತಿಯೋಧರ ಪುಣ್ಯಬಲ ಎಂದು ಹೇಳುತ್ತಾರೆ. ಈ ಬಗೆಯ ಕೃತಜ್ಞತೆ, ವಿಶಾಲದೃಷ್ಟಿ, ಏಕತೆಯ ಗುರಿ, ವಿಶ್ವಶಾಂತಿ, ಮಾನವತೆಯ ಉಜ್ವಲ ಭವಿಷ್ಯ ಇವು ಅವರ ಕೇಂದ್ರ ವಿಚಾರಗಳು.

ನಿಲ್ಲಬಲ್ಲ, ಕಾದಿಡಬೇಕಾದ ಕೃತಿಗಳನ್ನು ಲಕ್ಷೆಟ್ಟಿಯವರಿಂದ ಅಪೇಕ್ಷೆ ಮಾಡುವದು ತಪ್ಪಲ್ಲ.

ಬೆಳಗಾವಿ,
೧–೧೧–೧೯೫೭.

— ಸೌ. ಪಾರ್ವತಿದೇವಿ ಹೆಗಡೆ

# ಶುಭೇಚ್ಛೆ

ಶ್ರೀಮಾನ್ ಬಾಳೇಶ ಲಕ್ಷೆಟ್ಟಿ ಅವರು ನನ್ನ ತರುಣ ಮಿತ್ರರು. ‘ ಕಾವ್ಯಕ್ಷೇತ್ರದಲ್ಲಿ ಅವ್ಯಾಹತವಾಗಿ ದುಡಿಯಬೇಕು; ಹೆಸರು ಪಡೆಯಬೇಕು ’ ಎಂಬ ಅವರ ಹಂಬಲ ಅವರ ಜೀವನದಲ್ಲಿ ಅನೇಕ ಮುಖವಾಗಿ ವ್ಯಕ್ತವಾಗುವದನ್ನು ಕಾಣುತ್ತೇವೆ. ಅವರ ಕವಿ ಹೃದಯವೂ ಕಾವ್ಯಜೀವನವೂ ಇನ್ನೂ ವಿಕಾಸಗೊಳ್ಳಬೇಕಾಗಿವೆ. ಆ ವಿಕಾಸಕ್ಕೆ ಅವರು ಉಚಿತವಾದ ಸಾಧನೆ, ಅಭ್ಯಾಸ, ತಪಸ್ಸುಗಳನ್ನು ಆಚರಿಸಬೇಕಾಗಿದೆ. ಅವರ ಅಂತರ್ಬಾಹ್ಯ ತಪಸ್ಸಿನ ಮೂಲಕ, ಅವರ ಹೃದಯಕ್ಕೆ ‘ ಕವಿ-ದರ್ಶನ ’ ವಾಗಲಿ. ಅವರ ಕೃತಿಗಳಿಗೆ ಕಾವ್ಯ-ಕಲ್ಪನಾ ವಿಲಾಸಗಳ ರಸಸ್ಪರ್ಶವಾಗಲಿ. ಓರ್ವ ಗೆಳೆಯನು ತನ್ನ ಸ್ನೇಹಿತನಿಗಾಗಿ ಇವಕ್ಕಿಂತ ಹೆಚ್ಚಿಗೇನನ್ನು ಬಯಸುವದು? ಹೆಚ್ಚಿಗೇನನ್ನು ಬೇಡುವದು?

೨೨-೧೦-೫೭. —ಈಶ್ವರ ಸಣಕಲ್ಲ.

# ಸಮರ್ಪಣೆ

ಸಾಹಿತ್ಯದ ಸದಭಿಮಾನಿಗಳಾದ

**ರಾವಸಾಹೇಬ ಜಿ. ಆರ್. ಹಿಡಕಲ್ಲ**

ಅವರಿಗೆ ಸಾದರಪೂರ್ವಕವಾಗಿ.

# ಮೊದಲು ಮಾತು

ಸದ್ಯದ ಕಥೆ ಕಾದಂಬರಿಗಳ ಯುಗದಲ್ಲಿ ರಾಷ್ಟ್ರೀಯ ಸ್ವರೂಪದ ಕವನ ಸಂಕಲನವೊಂದನ್ನು ಪ್ರಕಟಿಸುವ ಹವ್ಯಾಸವೆಂದರೆ ಒಂದು ಸಾಹಸದ ಕಾರ್ಯವೆಂದು ಹೇಳಬೇಕು. ದ್ವಿತೀಯ ರಾಜ್ಯೋದಯದ ಪಾವನ ಪ್ರಸಂಗದಲ್ಲಿ ಆಯ್ದು ರಾಷ್ಟ್ರೀಯ ಸ್ವರೂಪದ ಕವನಪುಷ್ಪಗಳನ್ನು ಕನ್ನಡಮ್ಮನ ಪಾದಪದ್ಮಗಳಲ್ಲಿ ಭಕ್ತಿಭಾವದಿಂದ ಅರ್ಪಿಸುತ್ತಿರುವೆ. ಇವು ನನ್ನ ಆರಂಭದ ಕವನಗಳು. ಈ ಕವನಗಳನ್ನು ಓದುವುದರಿಂದ ಕನ್ನಡ ಸೋದರ-ಸೋದರಿಯರ ಮನಮನಗಳಲ್ಲಿ ಸ್ವಲ್ಪಾದರೂ ವಿಶುದ್ಧ ರಾಷ್ಟ್ರೀಯತ್ವದ ಕಲ್ಪನೆ ಚಿಗಿತರೆ ಅದರಿಂದ ನಾನು ಕೃತಕೃತ್ಯನೆಂದೇ ಭಾವಿಸುವೆ.

**'ವೇಣಿಪುಷ್ಪ' 'ಸ್ತವರಾಜ'** ಮೊದಲಾದ ಕೃತಿಗಳನ್ನು ಪ್ರಕಟಿಸಿ ಖ್ಯಾತಿಪಡೆದ ಕವಯಿತ್ರಿ **ಸೌ. ಪಾರ್ವತಿದೇವಿ ಹೆಗಡೆ**ಯವರು 'ಭಾಗ್ಯೋದಯ'ಕ್ಕೆ ಮಂಗಲನುಡಿಯನ್ನು ಬರೆದು ಹೊಂಗಳೆಯನ್ನಿತ್ತಿದ್ದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಯ ವಂದನೆಗಳನ್ನು ಸಲ್ಲಿಸುವೆ. ಸಲಹೆ ಸೂಚನೆಗಳನ್ನು ನೀಡಿ ಸಹಕರಿಸಿದ ಸೋದರಿ ಪ್ರಫುಲ್ಲ ಹೆಗಡೆಯವರಿಗೂ ವಂದನೆಗಳನ್ನು ಅರ್ಪಿಸುವೆ. ನನ್ನಲ್ಲಿ ಸಾಹಿತ್ಯಾಭಿರುಚಿಯನ್ನು ಚಿಗುರಿಸಿ ಬೆಳೆಯಿಸಿದ ಪರಮಪೂಜ್ಯ ಗುರುಗಳಾದ **ಶ್ರೀ. ಪೀ. ಟಿ. ಕುಲಕರ್ಣಿ, M.A.,B.T.** ಅವರಿಗೆ ಎಷ್ಟು ಕೃತಜ್ಞತೆಗಳನ್ನು ಸಮರ್ಪಿಸಿದರೂ ಕಡಿಮೆಯೇ.

ಕವಿವರ್ಯ **ಶ್ರೀ. ಈಶ್ವರ ಸಣಕಲ್ಲ**, ಅವರು ಶುಭೇಚ್ಛೆಯನ್ನು ಕೋರಿ 'ಭಾಗ್ಯೋದಯ'ವನ್ನು ಸ್ವಾಗತಿಸಿದ್ದಾರೆ. ಅವರಿಗೆ ಇಂದಿಗೂ, ಎಂದಿಗೂ ಮುಂದೆ ಎಂದೆಂದಿಗೂ ಉಪಕೃತನಾಗಿರುವೆ.

ನನ್ನ ಹಲವಾರು ಕವನಗಳನ್ನು ಓದಿ ಸಲಹೆ ಸೂಚನೆಗಳನ್ನು ನೀಡಿ ಪ್ರೋತ್ಸಾಹಿಸುತ್ತ ಬಂದಿರುವ ಹಿರಿಯ ಕವಿಗಳಾದ ಸರ್ವಶ್ರೀ. ಚನ್ನವೀರ ಕಣವಿ, ಈಶ್ವರ ಸಣಕಲ್ಲ ಹಾಗೂ ಎಸ್. ಡಿ. ಇಂಚಲ, ಇವರುಗಳೆಲ್ಲರಿಗೆ ಚಿರಋಣಿಯಾಗಿರುವೆ.

‘ಭಾಗ್ಯೋದಯ’ ಕವನವನ್ನು ‘ವಿಜಯದುಂದುಭಿ’ಯಲ್ಲಿ ಬೆಳಕಿಗೆ ತಂದ ತರುಣ ಕವಿಗಳಾದ ಶ್ರೀ. ಬಿ. ಎ. ಸನದಿಯವರನ್ನು ಹಾರ್ದಿಕವಾಗಿ ಅಭಿನಂದಿಸುವೆ. ‘ಕೋರಿಕೆ’ ಅಕ್ಕಮಹಾದೇವಿ’ ಎಂಬ ಕವನಗಳು ‘ವಿಕ್ರಮ’ ಹಾಗೂ ‘ಸಾವಧಾನ’ ವಾರಪತ್ರಿಕೆಗಳಲ್ಲಿ ಈಗಾಗಲೇ ಪ್ರಕಟವಾಗಿವೆ. ಎರಡೂ ಪತ್ರಿಕೆಯ ಸಂಪಾದಕರುಗಳಿಗೆ ಧನ್ಯವಾದಗಳನ್ನರ್ಪಿಸುವೆ. ಸೂಕ್ತ ಸಲಹೆ ಸೂಚನೆಗಳನ್ನು ನೀಡಿದ ಗೆಳೆಯರಾದ ಬಿ. ಬಿ. ಹಿಂಗಮಿರೆ ಹಾಗೂ ಶಂಕರ ಧರಣಿ ಅವರಿಗೆ ವಂದನೆಗಳು.

ಈ ಪುಟ್ಟ ಕೃತಿಯು ಹೊರಬರಲು ಕಾರಣರಾದ ಸರ್ವಶ್ರೀ. ವಿಠ್ಠಲಹಟ್ಟಿ, ದುಂಡಪ್ಪ ಹುಡೇದ, ಎಲ್. ಎಚ್. ಪಾಟೀಲ, ಸಿದ್ದಣ್ಣ ಕಲ್ಯಾಣಿ, ಶಿವರಾಯಣ್ಣ ಕಲ್ಯಾಣಿ ಹಾಗೂ ಎಸ್. ಬಿ. ಕುಮಾರಮಠ ಈ ಎಲ್ಲ ಆತ್ಮೀಯ ಗೆಳೆಯರ ಉಪಕಾರ ಸ್ಮರಿಸುವೆ.

ಮುದ್ರಣ ಕಾರ್ಯವನ್ನು ಅಂದವಾಗಿ ನಿರ್ವಹಿಸಿ ಕೊಟ್ಟ ದಿ ವಿಶ್ವ ಭಾರತ ಮುದ್ರಣಾಲಯದ ಮ್ಯಾನೇಜರರಾದ ಶ್ರೀ. ಡಿ. ಎಸ್. ಕಬಾಡಗಿಯವರಿಗೂ ಕೃತಜ್ಞನಾಗಿರುವೆ.

ಎಂದಿನಂತೆ ಈ ಕೃತಿಯನ್ನಾದರೂ ಕನ್ನಡಿಗರು ಪ್ರೋತ್ಸಾಹಿಸುವರೆಂದು ತುಂಬಾ ನಂಬಿರುವೆ.

ಲಿಂಗರಾಜ ಕಾಲೇಜ,
ಬೆಳಗಾವಿ,
೧-೧೧-೧೯೫೭.

ಬಾಳೇಶ ಲಕ್ಷೆಟ್ಟಿ

## ಈ ಸಂಕಲನದಲ್ಲಿ




# ಭಾಗ್ಯೋದಯ

ಉದಯವಾಗಿದೆ ನಮ್ಮ ಚಲುವ ಕನ್ನಡ ನಾಡು
ಹೊಸತು ಹೆಸರನು ಹೊತ್ತ ಮೈಸಿರಿಯ ಹಿರಿನಾಡು | ಪಲ್ಲವಿ |

ಭಾರತಾಂಬೆಯ ಮನೆಯ
ದೀಪ ಕನ್ನಡ ನಾಡು
ಅವಳ ಹಿರಿಮೆಯ ಜಗಕೆ
ಸಾರಿ ಹೇಳುವ ಹಾಡು
ಉದಯವಾಗಿದೆ....

ಕಾವ್ಯ–ಕಲೆ–ಸಂಸ್ಕೃತಿಯ
ಹಿರಿಮೆ ಕಂಡಿಹ ನಾಡು
ಇಂದದರ ಹೊಸಮುಖವ
ತಾಳಿ ಬರುತಿದೆ ನೋಡು
ಉದಯವಾಗಿದೆ....

ಪ್ರಕೃತಿಯೈಸಿರಿ ತುಂಬಿ
ತುಳುಕುತಿಹ ಸಿರಿನಾಡು
ಹೊಸಬೆಳಕ ಸ್ವಾಗತಿಸೆ
ಸಿದ್ಧವಾಗಿಹ ಬೀಡು
ಉದಯವಾಗಿದೆ....

ಐಕ್ಯತೆಯ ಸಂಕಲ್ಪ
ಗೈದ ಈ ಹಿರಿನಾಡು
ಪ್ರಗತಿಪಥದಲಿ ನಡೆಯೆ
ಕೀರ್ತಿಗೆಲ್ಲಿಯ ಕೇಡು!
ಉದಯವಾಗಿದೆ....



# ಕೋರಿಕೆ

ಯುಗಯುಗಂಗಳ ದುಗುಡನಳಿಸುವ
ಪರಮಜ್ಯೋತಿಯು ಬೆಳಗಲಿ;
ನಾಡದೇವಿಯ ಗರ್ಭಗುಡಿಯೊಳು
ದೀಪ್ತಿ ಸುಧೆಯನು ಹರಿಸಲಿ !

ಮಂಗಲಾಂಗಿಯ ಭವ್ಯಪೂಜೆಯು
ನಿತ್ಯನಿರಂತರ ಸಾಗಲಿ
ಪಂಚಶೀಲದ ಮಹಿಮೆ ಸಾರುತ
ನಮ್ಮ ಧ್ವಜವದು ಹಾರಲಿ !

ನಾಡಪ್ರಗತಿಗೆ ಶೂಲವಾಗಿಹ
ಜಾತಿದ್ವೇಷವು ಅಳಿಯಲಿ
ನಾಡತಾಯಿಯ ಭವ್ಯಬಾನೊಳು
ಐಕ್ಯ ತಾರೆಯು ಮೂಡಲಿ ;

ನ್ಯಾಯನೀತಿಯ ಸತ್ಯಜೀವನ
ನಮ್ಮ ಜನಗಳದಾಗಲಿ
ಪ್ರೇಮಮೂರುತಿ ಸತ್ಯದಾರುತಿ
ನಾಡ–ಜೀವನ ಬೆಳಗಲಿ !

# ಕರೆ

ಹೊಸಜೀವ ಹೊಸಭಾವ ಹೊಸತು ಹರುಷವ ಪಡೆದು
ಹೊಸಹಾಡು ಹಾಡಿರಣ್ಣ
ಜಾತಿಮತಪಂಥಗಳ ಪಾಶಗಳ ಹರಿದೊಗೆದು
ಹೊಸನಾಡು ಕಟ್ಟಿರಣ್ಣ !

ಜನದ ಮನಮನಗಳಲಿ ಸಂಪ್ರೀತಿ ಮರಿದುಂಬಿ
ಹೊಸಗೂಡು ಕಟ್ಟಲಣ್ಣ
ತೊಂಬತ್ತು ತುಂಬಿದರು ಹದಿನಾರ ಹರೆದುಂಬಿ
ಹೊಸಬಾಳು ಬೆಳಗಲಣ್ಣ !

ಮೌಢ್ಯತೆಯ ತುಳಿದೊಗೆದು ಕಲಿತನದಿ ಕಾದುತ್ತ
ಋಷಿಕುಲವ ಬೆಳಗಿರಣ್ಣ
ಸಂಸ್ಕೃತಿಯ ಭವ್ಯತೆಯ ದಿವ್ಯತೆಯ ಆಳದಲಿ
ಮೈಮನವ ತೊಳೆಯಿರಣ್ಣ !

ಎರಡು ಎಂಬುದು ಮರೆದು ಒಂದುಭಾವವ ತಳೆದು
ಚಂದಾಗಿ ಬಾಳಿರಣ್ಣ
ಹೊಸತನದ ಜೊತೆಯಲ್ಲಿ ಹಳೆತನವ ಬೆರಬೆರಸಿ
ಹೊಸಮಾತು ಆಡಿರಣ್ಣ !

ಎಳ್ಳುಬೆಲ್ಲವು ಬೆರೆತು ಸವಿಯ ಬೀರುವ ತೆರದಿ
ಸವಿಯಾಗಿ ಬಾಳಿರಣ್ಣ
ಬಾಳಗಿರಿಯನು ಏರಿ ಬಾಳಮಂದಿರ ಸೇರಿ
'ಬಾಳೀಶ' ಆಗಿರಣ್ಣ !

# ಓ ! ಅಕ್ಕಮಹಾದೇವಿ

ಓ ! ಅಕ್ಕಮಹಾದೇವಿ ನೀನಹುದು ಜಗದೇವಿ
ಹೊಸನಾಡ ಕುಲವನ್ನು ಸಿಂಗರಿಸ ಬಾ ದೇವಿ,
ಪ್ರಭುದೇವ ಬಸವಾದಿ ಶಿವಶರಣರೊಡಗೂಡಿ
ಬೆಳಗಿ ತೊಳಗಿದೆಯಕ್ಕ ಕರುನಾಡ ಭವ್ಯಭುವಿ !

ತಾರುಣ್ಯ ಬಾಳಿನಲಿ ವೈರಾಗ್ಯ ನಿಧಿಯಾಗಿ
ಕೋಟಿ ಹೆಂಗಳ ಬಾಳ್ಗೆ ಭಾಗ್ಯದೇವತೆಯಾಗಿ
'ಕನ್ನಡವು ನೀನಾಗಿ ನೀನೆ ಕನ್ನಡವಾಗಿ'
ಧನ್ಯಗೊಳಿಸಿದೆಯಕ್ಕ ಕನ್ನಡರ ಬಾಳನ್ನು !

ಉಡುತಡಿಯು ನೀ ತೊರೆದು ಚನ್ನಗಿರಿಯನು ಸೇರಿ
ಹರನ ಕರವಿಡಿದಿಯಕ್ಕ ಸುಮಸುರಿವ ಬೆಟ್ಟದಲಿ
ಹೆಣ್ಣು ಕುಲ ಮೇಲೆತ್ತಿ ಹೆಣ್ಣು ಧರ್ಮವ ಸಾರಿ
ಸುಧೆಯ ಹರಿಸಿದಿಯಕ್ಕ ಹೆಣ್ಣುಕುಲ ಜಲಧಿಯಲಿ !

ಪರಮ ಪತಿವ್ರತೆಯರಿಗೆ ಮಹಾಗುರುಮಣಿ ನೀನು
ಹರನ ಭಕ್ತವೃಂದದ ಪ್ರೀತಿಪ್ರಾಣವು ನೀನು
ಶರಣ ಸತಿಯರ ಪರಮ ಭಾಗ್ಯದೈಸಿರಿ ನೀನು
ನಿನ್ನ ಮಾರ್ಗವ ತುಳಿಯೆ ಜೀವನವು ಹಾಲ್-ಜೇನು !



# ಶತವರುಷಗಳ ಕನಸು

ದಣಿದಿತ್ತು ಮೈಯೆಂದು ಹಗಲು ಪವಡಿಸಿರೆ
ಪ್ರಜ್ವಲಿಸಿ ಹೊಳೆಯಿತೊಂದು ಬೆಳಕು
ಬಣ್ಣಿಸಲಸದಳವದರ ಥಳಕು !
ಕನಸಿನೊಳಗೊಂದು ಹೊಂಗನಸು !!
ಲಕ್ಷೋಪಲಕ್ಷ ಯೋಧರವರು
ಅಶ್ವಗಳ ಹತ್ತಿಹರು
ಖಡ್ಗಗಳನೆತ್ತಿಹರು
ಬಂಧುತ್ವ ಭಾವದಲಿ ಹೆದ್ದಾರಿ ತುಳಿದಿಹರು
ಕಂಕಣವ ಕಟ್ಟಿಹರು!

ದಹಿಸುತಿರೆ ಮೈಮನವ ದಾಸ್ಯತೆಯ ಕಾಳ್ಕಿಚ್ಚು
ಬಲಿಯುತಿದೆ ಕ್ಷಣಕ್ಷಣಕು ಸ್ವಾತಂತ್ರ್ಯದಾ ಹುಚ್ಚು
ತುಂಬುತಿದೆ ರೋಮರೋಮದಲಿ
ದೇಶಪ್ರೇಮದ ಕೆಚ್ಚು !

' ಚಲ್... ಚಲೋಜೀ.... ಚಲೋ.... ಚಲೋ '
ಊದುತಿದೆ ಕ್ರಾಂತಿಕಹಳೆ
ಹಿಡಿಕೈಲಿ ಭರ್ಚಿ ನಡೆಭರ್ ಭರಾಟಿ....
ಹಾಡುತಿದೆ ಆತ್ಮವಾಣಿ.
ಏನವರ ಸ್ವಾಭಿಮಾನ
ಎನಿತದರ ಔನ್ನತ್ಯ

ನೋವು ನಂಜಿಗಿಂಬಿಲ್ಲ

ಸ್ವಾರ್ಥ ಸಾಮ್ರಾಜ್ಯದಾ ನೆರವಿಲ್ಲ

ಹುಟ್ಟು ಸಾವುಗಳಿಗವರು ಅಂಜಿಹಿಂದೆಗೆದುದೇ ಇಲ್ಲ.

ನಂಬಿಹರು ಆತ್ಮಬಲ

ಹಿಡಿದಿಹರು ರುದ್ರಛಲ!

× × ×

ಸಂಗೊಳ್ಳಿ ರಾಯಣ್ಣ ಕನ್ನಡ ಕೇತನವ

ನಭಕೆತ್ತಿ ನಿಂತಿಹನು!

ಬದಿಗಿಹರು ನಾನಾ ಮೇಣ್ ಬಹಾದ್ದೂರಷಾ...

ಜಾತಿಮತ ಪಂಥಗಳ ಕಾಲ್ತೊಡಕು ನಮಗಿಲ್ಲ

ಜಾತಿ ಎರಡಿಲ್ಲ ಕಾಣ್ ಒಂದೇ ಒಂದು ಜಾತಿ

ಅದುವೆ ಮಾನವ ಜಾತಿ!

ಏನವರ ಹಿರಿ ಭಾವ

ಎನಿತದರ ಗಾಂಭೀರ್ಯ

ಭುಸ್‌ಗುಡುವ ಸರ್ಪಗಳ ಹೆಡೆಮುರಿಗೆಗಟ್ಟಿಹರು

ಜೊತೆಗಿಹಳು ಝಾಂಸಿರಾಣಿ

ನುಡಿದಿಹಳು ಅಮರವಾಣಿ




' Be up and do something ; awake ! arise !
Stop not till the goal is reached '

ಕಿತ್ತೂರ ಚನ್ನಮ್ಮ
ಶೌರ್ಯದೋತ್ಸವದಲ್ಲಿ ಕನ್ನಡವ ಮೆರೆಸಿಹಳು
ತನ್ನತನ ಕಾಯ್ದಿಹಳು !

ಹೆಣ್ಣು ಹೆಣ್ಣಲ್ಲ
ಹೆಣ್ಣು ಸಾಹಸದ ವಿಜಯಲಕ್ಷ್ಮಿ
ವೀರ ರಮಣಿಯರೆ ಇದಕೆ ಸಾಕ್ಷಿ !
ಹೆಣ್ಣುತನ ಬಿಸುಟೊಗೆದು ಗಂಡಾಡಿ ತಾನಾಗಿ
ಕಾದು ಮಡಿದಳು ದೇವಿ
ತ್ರಿಭುವನಕಧಿದೇವಿ !

ಅಯ್ಯೋ.... ಹಾಯ್ ದುರ್ವಿಧಿಯೆ, ದಾಸ್ಯದ ಕೂಪದಲಿ
ಕಿತ್ತೂರ ಕೇಸರಿಣಿ ತಾಯ್ನೆಲವ ಕಾಯ್ದದಲಿ
ಸ್ವಾತಂತ್ರ್ಯ ದಾಹದಲಿ
ಸಾವನ್ನೆ ಅಪ್ಪಿದಳು ! !
' ಕಾಲಾಯ ತಸ್ಮೈನಮಃ '
ನರಗುಂದ ಕೇಸರಿಯ ಕೊರಳ ಕಣ್ಣೆಯಕಂಡು
ಪಾಷಾಣ ವಿದ್ರವಿಸಿತು.

× × ×

ಅಂದಿನ ಆದಿನ ಇಂದಿಗು ಪಾವನ

ಅಂದಿನ ಕಾರ್ಯವು

ಎಂದಿಗು ಮಾನ್ಯವು.

ಅಂದಿನ ವೀರರ ಪುಣ್ಯದ ಬಲದಿಂ

ಸ್ವತಂತ್ರವಾಯಿತು ಈ ನಾಡು;

ಭಾರತ ಮಾತೆಗೆ ಶುಭವನು ಕೋರುತ

ಕೋಗಿಲೆ ಹಾಡಿತು ಹೊಸಹಾಡು!

ಜಯ ಜಯ ಜಯ ಜಯ ಭಾರತ ಭಾಗ್ಯಶ್ರೀ

ಜನಮನ ತುಂಬಲಿ ನವನೀತ

ಜಗದೊಳು ಮೊಳಗಲಿ ಜಯಗೀತ!!



# ಭಾಗ್ಯೋದಯ

"ಕಲ್ಪನೆಯು ಕೂಸಾದ ಕಲೆ ಕಲಾಯುಸ ವಿಧಾಸ" ಎಂಬ ತಾರ್ಕಿಕರ ಆರೋಪದಿಂದ ಕಾವ್ಯ ಮುಕ್ತವಾಗುತ್ತಿದೆ – ಜನಸಮ್ಮುಖವಾಗಿ. ಸತ್ಯ-ಸೌಂದರ್ಯಗಳ ಉಪಾಸಕನಾದ ಕವಿ ಇತ್ತೀಚೆ ರಾಷ್ಟ್ರೀಯ ಪ್ರವೃತ್ತಿಯುಳ್ಳವನಾಗುತ್ತಿದ್ದಾನೆ. ಅವನ ಸುರಸ್ವಪ್ನವನ್ನು ಅರಿತ ಜನತೆ ಉತ್ತಮವಾದುದಕ್ಕಾಗಿ ಶ್ರಮಿಸುತ್ತದೆ. ಇಂತಹ ಕವಿ ಪರಂಪರೆ ವಿಟ್ಮನ್, ಕಾರ್ಪೆಂಟರ್, ಮೈಕೊವಸ್ಕಿ ಮೊದಲಾದವರಿಂದ ಸ್ಪಷ್ಟವಾಗಿದೆ. ಶ್ರೀ. ಬಾಳೇಶ ಲಕ್ಷೆಟ್ಟಿಯವರೂ ಆ ದಾರಿಯಲ್ಲಿ ಹೆಜ್ಜೆ ಹಾಕಿದ್ದು ಸೂಕ್ತವಾದುದು. ಈ ಪುಟ್ಟ ಸಂಗ್ರಹ ರಾಷ್ಟ್ರೀಯ ಸಾಹಿತ್ಯ ಸಿಂಧುವಿನಲ್ಲಿ ಒಂದು ಬಿಂದುವಾಗಿದೆ.

……ಇಲ್ಲಿನ ಐದೂ ಕವನಗಳು ವಾಚನಾರ್ಹವಾಗಿವೆ ಎಂದು ಧಾರಾಳವಾಗಿ ಹೇಳಬಹುದು. ಅವರ ದೃಷ್ಟಿ ಪ್ರಗತಿಪರವಾದುದು ಭಾರತದ ಏಕತೆ, ಕರ್ನಾಟಕದ ಹಿರಿಮೆ ಅವರ ದೃಷ್ಟಿಯಲ್ಲಿ ವ್ಯಕ್ತವಾಗಿವೆ. ಭಾರತದ ಕೊಡುಗೆ ಪಂಚಶೀಲ "ಎಂಬ ಪ್ರಜ್ಞೆ ಅವರಲ್ಲಿದೆ. ಸಂಸ್ಕೃತಿಯ ಭವ್ಯತೆ-ದಿವ್ಯತೆಗಳನ್ನು ಕಂಡ ಕವಿ ಅದಕ್ಕಾಗಿ ಶ್ರಮಿಸಲು ಜನತೆಯನ್ನು ಕರೆಯುತ್ತಾರೆ.

……ನಿಲ್ಲಬಲ್ಲ, ಕಾದಿಡಬೇಕಾದ ಕೃತಿಗಳನ್ನು ಲಕ್ಷೆಟ್ಟಿಯವರಿಂದ ಅಪೇಕ್ಷೆ ಮಾಡುವದು ತಪ್ಪಲ್ಲ."

ಬೆಳಗಾವಿ, ೧–೧೧–೧೯೫೭. | ಸೌಭಾಗ್ಯವತಿ ಪಾರ್ವತಿದೇವಿ ಹೆಗಡೆ
( ಮಂಗಲ ನುಡಿಯಿಂದ )

-೦

## ಅಭಿಪ್ರಾಯ.

"ಶ್ರೀ ಬಾಳೇಶ ಲಕ್ಷೆಟ್ಟಿಯವರ 'ಭಾಗ್ಯೋದಯ'ದಲ್ಲಿ ಪ್ರಕಟವಾಗಿರುವ ಕವನಗಳಲ್ಲಿ ಕವಿಯ ಸಹೃದಯತೆ ಮತ್ತು ಸೌಜನ್ಯಗಳು ಕಂಡುಬರುತ್ತವೆ. ಕಾವ್ಯಕ್ಕೆ ಬೇಕಾದ ರೀತಿ ನೀತಿ ಹಾಗೂ ಶಕ್ತಿಸಾಮರ್ಥ್ಯದ ಚಿಹ್ನೆಗಳನ್ನು ಈ ಸಂಕಲನದಲ್ಲಿ ನೋಡಬಹುದು."

—ಕೆ. ಆರ್. ಜೆಜ್. ಆಚಾರ್, M.A. ( ಮೈಸೂರು )

ಮುಂಬರುವ ಕೃತಿ "ನಿರಾಭರಣ ಸುಂದರಿ" ( ಕವನ ಸಂಕಲನ )